# ಯಾರೋ ಅಂದರು

(೫ ದೃಶ್ಯಗಳ ಒಂದು ಜಾನಪದ ಗೀತಾ ನಾಟಕ)

**ಶಿವರಾಮ ಕಾರಂತ**

ಪುತ್ತೂರು ದಸರಾ ಸಮಿತಿಯಿಂದ

1938

**ಬೆಲೆ: ೦-೨-೦**

# ಯಾರೋ ಅಂದರು

(೫ ದೃಶ್ಯಗಳ ಒಂದು ಜಾನಪದ ಗೀತಾ ನಾಟಕ)

ಶಿವರಾಮ ಕಾರಂತ

ಪುತ್ತೂರು ದಸರಾ ಸಮಿತಿಯಿಂದ

1938

ಬೆಲೆ: ೦–೨–೦

# ಮುನ್ನುಡಿ

ಇದು 'ಸೋಮಿಯ ಸೌಭಾಗ್ಯ'ದಂತೆ ರಚನೆಗೊಂಡ ಪುಟ್ಟ ಕೃತಿ. ಅದು ದುಃಖಪರ್ಯವಸಾಯಿ ಪ್ರಸಂಗ; ಇದು ಬರಿಯ ಪ್ರಹಸನ. ಇಲ್ಲಿ ಎಲ್ಲರೂ ಹಾಸ್ಯಕಾರರು. ಹಾಸ್ಯಕ್ಕೆ ತುತ್ತಾಗುವವನು ಎಂಥವನೆಂದು ಆ ಸ್ಥಿತಿಯಲ್ಲಿದ್ದೇ ಊಹಿಸಬೇಕು.

ಈ ನಾಟಕದಲ್ಲಿನ ಪಾತ್ರಗಳ ಮಾತುಗಳು ನಮ್ಮ ದಕ್ಷಿಣ ಕನ್ನಡದ ತುಳು, ಕನ್ನಡ ಹಾಡುಗಳ ರೀತಿಯಿಂದ ರಚನೆಗೊಂಡಿವೆ. ಇದನ್ನು ಈ ಬಾರಿಯ ದಸರೆಯಲ್ಲಿ ಪ್ರಯೋಗಕ್ಕೆ ತರುವ ಆಸೆ ನಮ್ಮಲ್ಲಿದೆ. ದಸರಾ ಸಮಿತಿಯವರು ಅದನ್ನು ವಾಚಕರಿಗೆ ಪುಸ್ತಕರೂಪದಲ್ಲಿ ಕೊಡಲು ನಿರ್ಧರಿಸಿದ್ದಾರೆ. ಹೀಗಿರಲು ಅದರ ಯಶಸ್ಸಿಗೆ ತನ್ನ ನಟವರ್ಗದ ಮಿತ್ರರೂ, ಸಮಿತಿಯವರೂ ಕಾರಣರೆಂದು ಬೇರೆ ಹೇಳುವ ಕಾರಣವಿದೆಯೇ?

28 – 9 – '38,<br>ಪುತ್ತೂರು.

ಇತಿ,<br>ಶಿವರಾಮ ಕಾರಂತ.

## ಪಾತ್ರ ಪರಿಚಯ

ಸೂರು, ಬಿರ‍್ಕ—ಊರಿನ ಸುದ್ದಿಗೆ ಬಲಿಯಾಗುವ ದಂಪತಿಗಳು.

ಚೋಮು, ದೂಮು, ಪಾಪ, ಪರಮು, ಅಚ್ಚ, ಲಚ್ಚ, ಸಾಂಬ, ಈಸೊರ, ಚಿಕ್ಕಪ್ಪ, ಕುಕ್ಕಪ್ಪ— ಇವರೆಲ್ಲ ಊರವರು. ಸೂರು ಬಿರ‍್ಕರ ಕತೆಯಲ್ಲಿ ಆಸಕ್ತರಾದ ಸುದ್ದಿಗಾರರು.

ಸುಬ್ರಾಯ, ಸೇಸಣ್ಣ—ಸುದ್ದಿಗೆ ಆಗಂತುಕರಾಗಿ ಸೇರುವವರು.

# ಯಾರೋ ಅಂದರು

## ೧

(ತೆರೆಯ ಹೊರಗೆ ಜನರ ಪಿಸು ಮಾತುಗಳು ಕೇಳಿಸುವುವು.)

ಯಾರೋ ಅಂದರು!
ಏನಂತೆ?
ಯಾರೋ ಅಂದರು; ಯಾರೋ ಅಂದರು!!
ಏನಂತೆ? ಏನಂತೆ?
ಯಾರೋ ಅಂದರು; ಯಾರೋ ಅಂದರು! ಯಾರೋ ಅಂದರು!!
ಏನಂತೆ? ಏನಂತೆ? ಏನಂತೆ?

(ಚೋಮಣ್ಣ, ದೂಮಣ್ಣ ಇಬ್ಬರು ಪ್ರವೇಶಿಸುವರು.)

ಚೋಮ — ಯಾರೋ ಅಂದರು!
ದೂಮ — ಏನಂತೆ?
ಚೋಮ — ನೀರೀಗೆ ಹೋಪಾಗ ಸೂರಕ್ಕ ಮೊನ್ನೆ
ಜಾರೀ ಬಿದ್ದಳಂತೆ । ನೀರೀಗೆ ।
ಜಾರೀ ಬಿದ್ದಳಂತೆ.
ದೂಮ — ಆ . . . ಹಾಂ
ಚೋ. — ನೀರಿಗೆ । ಜಾರೀ ಬಿದ್ದಳಂತೆ.
ನೀರೇನು ಕೆರೆಯೊಳಗೆ ಇದ್ದಿಲ್ಲವಂತೆ
ನೀರಿಲ್ದ ಕೆರೆಯಲ್ಲಿ ಬರಿ ಕೆಸರಂತೆ
ಕೆಸರೊಳಗೆ ಮುಳುಗಿ ಹೋಗಿದ್ದಳಂತೆ
ಬಿರ್ಮಣ್ಣ ಓಡ್ಬಂದು ಕೈಕೊಟ್ಟನಂತೆ
ಮೇಲೆತ್ತಿ ಕಾಂಬಾಗ ಬರಿ ಹೆಣವಂತೆ.
ದೂ. — 'ಬರಿ ಹೆಣವಂತೆ'!

ಚೋ. — ಸತ್ತ್ರ್ಹಣವಂತೆ!
ದೂ. — ಹಿಂಗೇನು? ಹೀಂಗೇನೂ?
ಯಾಕೆ ಸೂರಕ್ಕ ಜಾರಿ ಬಿದ್ದಳೊ?
ಕತ್ತಲಾಗಿತ್ತೇ, ಎಣ್ಣೆ ಬತ್ತಿತ್ತೇ?
ಚೋ. — ಸಂಗ್ತಿ ಹೇಳ್ತೀನೆ, ಕತೆಯೆ ಬ್ಯಾರುಂಟು.
ಗಂಡ ಹೆಂಡ್ರೊಳಗೆ ಅಷ್ಟಕ್ ಅಷ್ಟಂತೆ!
ದೂ. — 'ಅಷ್ಟಕ್ ಅಷ್ಟಕಂತೆ!' ಅಂದ್ರೆ ಯಾಕಂತೆ?
ಬಿರ್ಮ ಸೂರೂಗೆ ಕಚ್ಚು ಯಾಕಂತೆ?
ಚೋ. — ಅದ್ನೆ ಹೇಳ್ತೀನೆ: ನಾನು ಕಂಡಿಲ್ಲ;
ಆದ್ರೆ ಮಾತ್ಮಾತ್ರ ಎಂದೂ ಸುಳ್ಳಲ್ಲ.
ನಾನೇ ಕಾಣ್ದಿದ್ರು ಕಂಡವ್ರು ಹೇಳಿದ್ದು.
ಕಂಡದ್ ಕಂಡಾಂಗೆ ಹೇಳಿದ್ ಕೇಳಿದ್ದು.
ಎದ್ರಿಗ್ ಅನ್‌ದಿದ್ರೂ ಹಿಂದಕ್ ಅಂತಾರೆ
'ಬಿರ್ಮ ಎಂಬವ — ಯಾಕು ಮುಡಿದವ'.
ದೂ. — ಬಿರ್ಮನ ಮಾತ್ಬಿಡು ಗಂಡ್ಸರ ಜಾತೀಲಿ
ತೆಗೆದು ಸುಳ್ಡಾಂಗೆ; ಹಾದೀಲಿ ಬಿದ್ದವ.
ನಟ್ಟು ಬೆಳೆಸಿದ ಗಿಡದ ಲಕ್ಷಣ
ಬಿದ್ದು ಹುಟ್ಟಿದ 'ಹಾಗ್ಲಿ'ಗುಂಟೇನ?
ಚೋ. — ಅದೇ ಅಂತೇನೆ,
ಅದೇ ಅಂತೇನೆ,
ಅದೇ ಅಂತೇನೆ
ಅವನಪ್ಪನ ಬೇರೆಲ್ಲ ನಂಗೇ ಗೊತ್ತು.
ದೂ. — ಅವನಮ್ಮನ ಮನೆಯುವರು ಎಲ್ರಿಗು ಹೊರ್ತು
ಚೋ. — ಅವನ ಕುಲಕೇ ಗೊತ್ತಿಲ್ಲ ಬೆಪ್ರೆಂಬುದು ಸುರ್ಸಿ.
ದೂ. — ಹಿಡಿದ್ ಹಿಡಿದು ಕೊಡಬೇಕು ಮಾರ್‍ಯಮ್ಮಂಗೆ ಸಿರ್ಸಿ,
ಚೋ. — ಹಾಂಗಿರ್ತ ಇವನೊಬ್ಬ ದುಡಿವಂತ ಮಗನೆ?

ದೂ.—ಅಂಗೈಯಾಗೀನ ಹುಣ್ಣಿಗೆ ಕನ್ನಡಿ ಯಾಕೆ? ಏನ?

ಚೋ.—ಅದೇ ಅಂತೇನೆ.

ಅದೇ ಅಂತೇನೆ.

ಅದೇ ಅಂತೇನೆ

ಕಡಿಯಕ್ಕಿ ಕೆಲ್ಸವ ಮಾಡ್ದವನೆ ಅಲ್ಲ.

ದೂ.—ಹಾಂಗಿದ್ರು ದಿನಮಾತ್ರ ಹೋಗ್ತ್ರದೆಯಲ್ಲ!

ಚೋ.—ಅದ್ರು ಗುಟ್ಟು ಬ್ಯಾರುಂಟು, ಬಾಯ್ಬಿಡೋದು ಸಲ್ಲ.

ದೂ.—ಒಳಗಿನ ಗುಟ್ಟು ಶಿವನಿಗೇ ಗೊತ್ತು ಎಂಬರಲ್ಲ!

ಚೋ.—ಸಂಜೆ ತನಕ ಮನೆಬಿಟ್ಟ ಮಗನಿವನಲ್ಲ.

ದೂ.—ಗುಡ್ಗುಮ್ಮ ಗೂಡ್ಬಿಟ್ಟು ತಿರ್ಗೋಕೆ ಮರ್ಲ?

ಚೋ.—ಗುಮ್ಮಕ್ಕಿ ಇವನೂ; ಹೊತ್‌ಕಂತತ್ಲೆ ಎದ್ದ.

ದೂ.—ಮೋಳ ಬೆಕ್ಕಿನ ಯಾಪಾರ ಕತ್ಲೊಳಗೆ ಸುದ್ದ.

ಚೋ.—ಅದೇ ಅಂತೇನೆ

ಅದೇ ಅಂತೇನೆ.

ಅದೇ ಅಂತೇನೆ.

ಬೆಳ್ಳಿಪೂರಾ ಮೂಡೂಕಿಲ್ಲ; ಕೈಲಿ ಕಾಣು ಕಾಸು.

ದೂ.—ಸಾಜವಾದ ಕಜ್ಜಕ್ಕೆ ಕೊಡುವವರಿಲ್ಲ ಮೂಸು.

ಚೋ.—ಕಲಿಯುಗ ಅಂಬುದದಕೆ, ಕಳ್ರಿಗೇ ಕಾಲ.

ದೂ.—ಕಳ್ತನವೋ ಏನ್ಮಣ್ಣೋ, ಸತ್ಯಕ್ಕಂತು ಸೋಲ.

ಕತೆಯು ಮರ್ತ್ಯಲ್ಲ!

ಕತೆಯು ಮರ್ತ್ಯಲ್ಲ!

ಕತೆಯು ಮರ್ತ್ಯಲ್ಲ!

ಚೋ.—ಹೇಳುದುಳೀತೇ

ಕತೆ ಮುಂದಕ್ಕೆ?

ಪರರ ಎಂಜ್ಲಿಗೇ

ಬಾಯಿ ಹಾಕ್ಲಿಕ್ಕೆ

ತಾನು ಹೋದರೇ
ತನ್ನ ಅನ್ನಕ್ಕೆ
ಬೀದಿ ನಾಯಿಯು
ಬರೂದು ಮುಕ್ಲಿಕ್ಕೆ
ದೂ. — ಹತ್ತಾರೆ ಹೇಳು!
ಹತ್ತಾರೆ ಹೇಳು!
ಹತ್ತಾರೆ ಹೇಳು! . . . ಆದ್ರೆ ಬಿರ್ಮನ ಬಿಟ್ಯಲ್ಲ?
ಚೋ. — ಮಿಣ್ಣಗಿದ್ದವರ
ಬಣ್ಣ ವ್ಯಾಲಂತೆ
ಹೆಣ್ಣ ಆದವಳು
ತಾಳಿಕೊಂಡಾಳೆ?
ಊಟಕ್ಕಿಲ್ಲದ
ಉಪ್ಪು ಯಾಕಂತೆ?
ಜತೆಗಿಲ್ಲದ
ಗಂಡ ಯಾಕಂತೆ?
ದೂ. — ಅದು ವಾತಣ್ಣ
ಅದು ವಾತಣ್ಣ
ಅದು ವಾತಣ್ಣ . . . ಅಂದ್ರೆ ಬೇರಾರ್ನ ಕರ್ದಳೇನಣ್ಣ?
ಚೋ. — ಕೇಳು ದೂಮಣ್ಣ
ಕರ್ಯೊದ್ಯಾಕಣ್ಣ
ಹಪ್ಪು ಬಿದ್ದಿದ್ರೆ
ಹದ್ದಿಗೆ ಹೇಳ್ತಾರ?
ರೂಪು ಒಂದಿದ್ರೆ
ಊರಿಗೆ ಊರುಂಟು,
ಯಾವನೊ ಬಂದನು
ಗಂಟು ಬಿದ್ದನು.

ದೂ. — ಸಮ ಆಯ್ತಣ್ಣ.
ಸಮ ಆಯ್ತಣ್ಣ.
ಸಮ ಆಯ್ತಣ್ಣ . . . ಸೆಗಣಿ ಬಿದ್ದಲ್ಲಿ ಹುಳು ಸಾವಿರ!
ಚೋ. — ಕ್ಯಾದಿಗೆ ಬನಕ್ಕೆ ಹಾವೇ ನಂಟು
ಚಳ್ಳನ ಕಾಯಿಯು ಒಟ್ಟಾರೆ ಅಂಟು.
ತೊಡವೆಯ ಗೂಟವ ಮನೆಯವನೆ ಕಿತ್ತ,
ಕಾದಿದ್ದ ಎತ್ತಿಗೆ ಹಿತ್ಲೆಲ್ಲ ಭುಕ್ತ.
ದೂ — ಅದು ಇರ್ಲಣ್ಣ
ಅದು ಇರ್ಲಣ್ಣ
ಅದು ಇರ್ಲಣ್ಣ . . . . ಕೆರೆ ಕತೆಯೇನು ಬೇಗ ಹೇಳಣ್ಣ
ಚೋ. — ನೀನೊಬ್ಬ ಬೆಪ್ಪ! ಹೇಳಲೇನುಂಟು?
ಇಷ್ಟೆಲ್ಲ ಹೇಳ್ದೆ, ಗುಟ್ಟೆಲ್ಲುಂಟು?
ಒಂದಿನ ಬಿರ್ಮ ರಾತ್ರೀನೆ ಬಂದ:
ಬಂದವ್ನೇ ಕೂಗಿ, 'ಬಾಗಿಲು' ಎಂದ.
ಕೂಗಿದ, ಕೂಗಿದ ಗಂಟ್ಲೆ ಸೀಳಿ,
ಬಾಗಿಲ ತೆರಿಲಿಲ್ಲ ಆ ಮಾಂಕಾಳಿ.
ಸಿಟ್ಟಿಂದ ಕುದಿತಾನೆ ನಮ್ಮಣ್ಣ ಬಿರ್ಮ.
ಬಾಗಿಲ ಮುರಿದದ್ದೆ — ಗೊತ್ತಾಯಿತು ಮರ್ಮ:
ದೂ. — ಹ್ಯಾಷ್ ಚೋಮಣ್ಣ.
ಹ್ಯಾಷ್ ಚೋಮಣ್ಣ.
ಹ್ಯಾಷ್ ಚೋಮಣ್ಣ . . ಇವನಿಗಂತೇನೆ ಅದೇ ಮದ್ದಣ್ಣ
ಚೋ. — ಸಮ್ನಿರು ದೂಮಣ್ಣ, ಕತೇ ಕೇಳು:
ಬಂದವಂಗೆ ಬಿತ್ತೇಟು; ಗೋಳೀ ಗೋಳು.
ಬದ್ಕಿದ್ದೆ ದೊಡ್ಡಂತ ಅವ ಪಲಾಯ್ನ;
ಸೂರಕ್ಕಂಗೆ ಆಯ್ತಂದು ಮನೆ ಕೆರೆ ಅಯನ.
ದೂ. — ಹಾಂಗೆ ಆಯ್ತೇನು!

ಹಾಂಗೆ ಆಯ್ತೇನು!

ಹಾಂಗೆ ಆಯ್ತೇನು! . . ನಿಜಕು ಲಾಯ್ಕಣ್ಣ.

ಚೋ. — ನೀರಿಗೆ ಹೋದಾಗ ಸೂರಕ್ಕ ವೊನ್ನೆ

ಜಾರೀ ಬಿದ್ದಳಂತೆ । ನೀರಿಗೆ

ಜಾರೀ ಬಿದ್ದಳಂತೆ

ನೀರೇನು ಕೆರೆಯೊಳಗೆ ಇದ್ದಿಲ್ಲವಂತೆ

ಕೆಸರೊಂದು ಅದರೊಳಗೆ ಕಮ್ಮಿಲ್ಲವಂತೆ

ಹಾಂಗಿದ್ದು ಅದರೊಳಗೆ ಹಾರೀದಳಂತೆ

ಗಂಡನ ಮೇಲ್ಸಿಟ್ಟು ಕಾರಣವಂತೆ.

ಈ ಜೀವ ಬ್ಯಾಡೆಂದು ಮುಗಿಸಿದಳಂತೆ

೨

(ತೆರೆಯಲ್ಲಿ ತಿರುಗಿ ಗುಜು ಗುಜು ಸದ್ದು ಕೇಳುವುದು)

ಯಾರೋ ಅಂದರು!

ಏನಂತೆ?

ಯಾರೋ ಅಂದರು! ಯಾರೋ ಅಂದರು!

ಏನಂತೆ? ಏನಂತೆ?

ಯಾರೋ ಅಂದರು! ಯಾರೋ ಅಂದರು! ಯಾರೋ ಅಂದರು.

ಏನಂತೆ? ಏನಂತೆ? ಏನಂತೆ?

(ಅಚ್ಚಣ್ಣ ಮತ್ತು ಲಚ್ಚಣ್ಣರು ಸೇರಿ ಮಾತಾಡುತ್ತಾ ಬರುವರು)

ಅಚ್ಚಣ್ಣ – ನೀರಿಗೆ ಹೋದಾಗ ಸೂರಕ್ಕ ವೊನ್ನೆ

ಜಾರೀ ಬಿದ್ದಳಂತೆ । ನೀರಿಗೆ

ಜಾರೀ ಬಿದ್ದಳಂತೆ

ನೀರೇನು ಕೆರೆಯೊಳಗೆ ಇದ್ದಿಲ್ಲವಂತೆ

ಕೆಸರೊಂದು ಅದರಲ್ಲಿ ಕಮ್ಮಿಲ್ಲವಂತೆ

ಹಾಂಗಿದ್ದು ಅದರೊಳಗೆ ಹಾರೀದಳಂತೆ

ಗಂಡನ ಮೇಲ್ನಿಟ್ಟು ಕಾರಣವಂತೆ
ಈ ಜೀವ ಬ್ಯಾಡೆಂದು ಮುಗಿಸಿದಳಂತೆ.

ಲಚ್ಚಣ್ಣ—ಹಾಂಗೊಂದು ಸುದ್ಯುಂಟು; ದೇವರೇ ಬಲ್ಲ!
ಸಂಗ್ತ್ಯನುಸಾರೊಂದು ತಿಳಿಯೋದೆ ಇಲ್ಲ.
ಅವರ್ಮನೆಗಂಟ ಹೋಗಿದ್ದೆ ಇಬ್ಬರೂ ಇಲ್ಲ.
ತಳಕ್ಕಂತು ಮುಟ್ಟುದಿಲ್ಲ ಬುದ್ಧೀಯು ಜಲ್ಲ

ಅ — ಅದರ ಗುಟ್ಟು ನಾಬಲ್ಲೆ
ಬಿರುಮೇನು ಹೊಸಬಲ್ಲ

ಲ. — ನನಗಂತು ಸೂರಕ್ಕ
ಒಂದ್‌ಲಿಕಕ್ಕೆ ಸೊಸೆಯುಲ್ಲ.

ಅ. — ಹಾಂಗಿದ್ರೆ ಸೊಲ್ಲಿಲ್ಲ;
ನಂಟ್ರು ಮುಂದೆ ಒಯಿನಲ್ಲ.

ಲ. — ನಿಂಗ್ ಮಳ್ಳು ಲಚ್ಚಣ್ಣ!
ಸತ್ಯಕ್ಕೇನು ದಾಕ್ಷಿಣ್ಣ
ನಂಟ್ರುವರು ಅಂದ್ಕ್ಯಾತ್ರು
ಕಳ್ತನಕ್ಕ ಏನ್ ಹತ್ರು?
ಸುಳ್ಳಿಗೆ ತಳವಿಲ್ಲ! ನ್ಯಾಯಕ್ಕೆ ದಯೆಯಿಲ್ಲ.
ಇದ್ದದ್ದ ಹೇಳಲ್ಲ: ಅವಳು ಸತ್ರು ಚಿಂತಿಲ್ಲ.

ಅ — ಹಾಂಗಿದ್ರೆ ಹೇಳ್ತೇನೆ ತಪ್ಪಿದ್ರೆ ತಿಳ್ಸ್‌ನೀನು

ಲ. — ತಪ್ಪೇನು ಒಪ್ಪೇನು? ಇದ್ದದ ಹೇಳ್ನೀನು.

ಅ — ಕಣ್ಣಾರೆ ಕಂಡವರು ಹೇಳೀದ ಮಾತಿದು
ಸುಳ್ಳೆಂದು ತಿಳಿಬೇಡ ಲಚ್ಚಣ್ಣ ನೀನಿದ

ಲ. — ಓ . . . ಹಾಂಗೇನು?

ಅ. — ಬಿರ್ಮನ ತಪ್ಪಿಲ್ಲ, ಏನೇನು ಇಲ್ಲಂತೆ
ಸೂರಕ್ಕನ ಸೊಕ್ಕೇ ಕಾರಣವಂತೆ.

ಲ. — ಓ . . . ಹಾಂಗೇನು?

ಅ. — ಹೊರಗಂಟ ಹೋದವ ಹೊತ್ತಿಗ್ಯಂಚೆ ಬಂದಂತೆ
ಆಸ್ರಿಗೆ ನೀರೆಂದು, ಕೇಳೀದನಂತೆ.

ಲ. — ಓ . . . ಹಾಂಗೇನು!

ಅ. — ತರ್ತೇನೆ ಎಂದವಳು ಒಳಮನೆ ಸೇರ್ಕೊಂಡು
ಗುಜುಗುಜು ಅಂದದ್ದು ಕಿವೀಗೆ ಬಿತ್ತಂತೆ

ಲ. — ಓ . . . . ಹಾಂಗೇನು!

ಅ. — ದಿಗಿಲಾಯ್ತು ಬಿರ‍್ಮಂಗೆ ಸರಸರ ಒಳಗ್ಹೋದ
ಬ್ಯಾರೊಬ್ಬ ಅಲ್ಲಿ ನಿಂತಿದ್ದನು.

ಲ. — ಓ . . . . ಹಾಂಗೇನು!

ಅ. — ಬಿಟ್ಟಾನ ಬಿರ‍್ಮಣ್ಣ? ಎದೆ ರಕ್ತ ಕುದಿವಾಗ
ಕೆನ್ನೆಗೆ ನಾಕೇಟು ಎಳ್ಸಿದನಂತೆ

ಲ. — ಯಾರಿಂಗೆ?

ಅ. — ಬಂದವಂಗೆ ನಾಕೇಟು. ಇವಳಿಂಗೆ ಎಂಟಂತೆ
ಒತ್ತಿಬಪ್ಪ ಸಿಟ್ಟೀಗೆ ಕೊಟ್ಟೀ ಬಿಟ್ಟ.

ಲ. — ಯಾರಂವ?

ಅ. — ಬಂದಂವ ಯಾರಂದ್ರೆ ಅವನಲ್ದೆ ಮತ್ತ್ಯಾರು?
ಪರಮಣ್ಣನ ಸಣ್ಮಗ ಸುಬ್ರಾಯನಂತೆ.

ಲ. — ಲಾಯಖ್ಯಾಯ್ತು.
ಹಾಂಗಿದ್ರೆ ಹೇಳ್ತೇನೆ ಆ ಕಥೆ ಬ್ಯಾರುಂಟು
ಹೆಂಗ್ಸ್ರೊಳಗೆ ಸುಳಿದಿಟ್ಟರೆ, ಸೂರಕ್ಕ
। ಸುಳ್ಳಲ್ಲ
ಅವಳ್ ಕಣ್ ನಾಟದಿದ್ದ ಜನವಿಲ್ಲ ॥
ಪರಮಣ್ಣನ ಮಗಚಂಗ; ಪಿರಾಯಕ್ಕೆ ಬಂದವ
ತೊಂಡೆ ಹಣ್ಣಿನ ತುಟಿ ಕಂಡ್ಲು ಸೂರಕ್ಕ
। ಸುಳ್ಳಲ್ಲ.
ಗುಂಡಿನಂಥ ಹುಡುಗನ ಸೆಳೆದಾಳು ॥

ಅಂಚಿನಾಗೊಂದೀನ, ನಾಬೈಲಲ್ಲಿ ಬಪ್ಪಾಗ
ಸುಬ್ರಾಯು ಸೂರಕ್ಕ ಮೆರಿತಿದ್ರು
। ಮುದವೇಂ
ಹೆಗಲ್ ಮೇಲೆ ಕೈಯಿಟ್ಟು ಗಟಗಿತ್ತಿ ॥

ನಾ ಬಂದ್ರು ಕಾಣ್ಲಿಲ್ಲ; ಸನಿಯುಕ್ಕ ತೇಲ್ಲಿಲ್ಲ
ಹೊಳೆಗಿಳ್ದ ಹೆಣ್ಣವಳು ಚಳಿಯೇನು!
। ಅಚ್ಚಣ್ಣ
ಬೈಲಲ್ಲೆ ಹೀಂಗಾಪ್ರೆ ಮುನ್ಯಂಗೆ

ಅ.—ನಾನವಳ ಗಂಡಾದ್ರೆ ಎಂದೆ ಪಡ್ಚಾಗತಿದ್ಲು
ಬಾಳ್ಸಲಿಕ್ಕೆ ಬಾರದವ ಗಂಡೇನು!
। ಆ ಬಿರ್ಮ
ಬೊಳ್ಳೂದೆ ಸಮುವಂತೆ ವಿೂಸೀನ. ॥

ಇವ ಬೆಪ್ಪ ಆದ್ದಕ್ಕೆ ಅವಳು ಬಾವಿ ಹಾರಿದ್ಲು
ನೀರಿಲ್ಲದ ಕೆರೆಯಲ್ಲಿ ಹಾರ್ತಾರೋ
। ಯಾರಾದ್ರು
ಹಾರಿದ್ರು ಇವನ್ಯಾಕೆ ತೆಗೆಬೇಕು? ॥

ಲ.—ಅವನ್ ತಪ್ಪು ಏನುಂಟು, ಹೆಣವಾದ್ರು ತೆಗಿಬ್ಯಾಡ್ವೆ
ತೆಗೆದದ್ದು ನಿಜವಾದ್ರೆ, ಸತ್ಲೇನೋ
। ನಿಜವಾಗಿ
ಸಾಯೂಕೆ ಎಂದವಳು ಹಾರಿರ್ಲ್ಲು,

ಅ.—ಬಿರ್ಮನ್ನ ಹೆದರ್ಸೋಕೆ ಹಾರಿರ್ಬೇಕು ಗಟಗಿತ್ತಿ
ಕಾಲಿಗೆ ಸೆರಗಡ್ಡ ಆಯ್ತುಂತೆ
। ಲಚ್ಚಣ್ಣ
ಯುಮ್ರಾಯ್ನಿಗಿಚ್ಚೆಯಾಗಿ ಕೊಂಡ್ಹೋದ. ॥

ಲ. — ಪಾಪಾನ ಕಾಣ್ಲಾರ್ದೆ ಯಮ್ರಾಯ ಸಾಗ್ಸೀದ
ಬಿರ್ಮಣ್ಣಗ್ಯಾಕೋ ಬಲುಚಿಂತಿ.
। ಅಂದರೆ
ಮದ್ದರ್ದೆ ಕೊಟ್ಟವಳು ಅವಳಲ್ವೆ!

ಅ. — ಮದ್ದೀನ ಮಂಕಲ್ದೆ ಬಿರ್ಮಣ್ಣ ಹಾಂಗಾಗ
ಹುಲಿಯಂಥ ಮನ್ಸ್ ನಾ ಬಲ್ಲೆ
। ಅಂತೇನೆ
ಹೆಂಡ್ತೀಗೆ ಹೆದರೋ ಮಗನಲ್ಲ!

ಲ. — ಅದು ಮಾತ್ರ ಸುಳ್ಳಣ್ಣ; ಸೂರಕ್ಕನ ಸೊಂಕೀಗೆ
ಸಿಂಹನಂಥ ಮನ್ಸ ಸಿಂಗಲೀಕ.
। ಅಂತೇನೆ
ಚಂದದ ಹೆಣ್ಣೆಂದ್ರೆ ಭಂಗಿಸಾನ್ಕ.

೩

(ತೆರೆಯಲ್ಲಿ ತಿರುಗಿ ಗುಜು ಗುಜು ಸದ್ದು)

ಯಾರೋ ಅಂದರು!
ಏನಂತೆ?
ಯಾರೋ ಅಂದರು! ಯಾರೋ ಅಂದರು! ಯಾರೋ ಅಂದರು!
ಏನಂತೆ? ಏನಂತೆ? ಏನಂತೆ?

(ಪಾಪಣ್ಣ, ಪರಮಣ್ಣ ಎಂಬಿಬ್ಬರು ಹರಟುತ್ತ ಬರುವರು)

ಪಾಪ. — ಯಾರೋ ಅಂದರು!

ಪರಮ. — ಏನಂತೆ!

ಪಾಪ. — ನೀರಿಗೆ ಹೋಪಾಗ ಸೂರಕ್ಕ ವೊನ್ನೆ
ಜಾರೀ ಬಿದ್ದಳಂತೆ । ನೀರಿಗೆ
ಜಾರೀ ಬಿದ್ದಳಂತೆ
ನೀರೇನು ಕೆರೆಯೊಳಗೆ ಇದ್ದಿಲ್ಲವಂತೆ

ಹಾರೂಕೆ ಮನ್ನಿಲ್ದೆ ಹಾರ್ಕೊಂಡಳಂತೆ
ಸೀರೀಯು ನೆರಿಸಿಕ್ಕಿ ಮುಳುಗಿದಳಂತೆ
ಮೇಲಿತ್ತಿ ಕಾಂಬಾಗ ಬರಿ ಹೆಣವಂತೆ
ಜಾರೆಯು ಹೆಣಕಾಗಿ ಗೋಳಿಟ್ಟನಂತೆ

ಪರ. — ಹಾಂಗ್ಯಾರೋ ಅಂದರು; ಸುದ್ಯೇನು ಸೂರೇನು!
ಪೋಲೀಸ್ರು ಬಂದ್ರುಂತೆ; ಹಿಡ್ಕೊಂಡು ಹೋದ್ರುಂತೆ
ಒಂದೊಂದು ತಿಳಿದೂ; ತಿಳಿದೋರು ಸುಮ್ನಾದ್ರು
ಸುಮ್ನಾದ್ರು ಯಾಕೇನೊ. ನೀ ಬಲ್ಲರೆ ಹೇಳೋ
ಬಲ್ಲವನೆ ಆಳು.

ಸೂರಕ್ಕ ಹಾದರ ಮಾಡಿದ್ದೇ ನಿಜವರ?
ಹೊಡೆದದ್ದು ಹೌದಾರ? ತಿಳಿದಿದೆಯು ಏನಾರ?
ನೀ ಬಲ್ಲರೆ ಹೇಳು. ಹೊಡೆದಾನು ನಿಜವೆ!
ಅವಳು ಸತ್ತಾಳು ನಿಜವೆ? ನೀ ಬಲ್ಲರೆ ಹೇಳು!
ಬಲ್ಲವನೆ ಆಳು.

ಪಾಪ — ಸೂರಕ್ಕನ ಹಾದರ! ಬೇಡದಕೆ ಆಧಾರ
ಇನ್ನಾರೋ ಜತೆಯುರ, ಸಿಕ್ಕಿದಳು ಅನಕರ
ನಾ ಬಲ್ಲವನೆ ಎಲ್ಲ ಅವ ಹೊಡೆದಾನು ನಿಜವು
ಅವಳು ಸತ್ತಾಳು ಶವವು. ನಾ ಬಲ್ಲವನೆ ಎಲ್ಲ
ಸಂಶಯು ಇಲ್ಲ.

ಪರ. — ಸೂರಕ್ಕನ ಬಳಿಯುಂತೆ: ಇದ್ದಂತೆ ಗೆಳೆಯುಂತೆ.
ಹೆಸರಂತೆ ತಿಳಿದಂತೆ; ಪೆಟ್ಟೀಗೆ ಮರೆಯುಂತೆ.
ನೀ ಬಲ್ಲರೆ ಹೇಳು. ಬಡಿದನೇ ಆಳು?
ಅವನ್ ಮನೆ ಹಾಳು. ನೀ ಬಲ್ಲರೆ ಹೇಳು
ಬಲ್ಲವನೆ ಆಳು.

ಪಾಪ. — ಸುಬ್ರಾಯುಂಗ್ಯಾವನ; ಸೊಕ್ಕ್ಯಲ್ಲಿ ಬಂದಾನ.
ಬಿರ್ಮಣ್ಣ ಬಿಟ್ಟಾನ? ನಿನ್ಮಗನೇ ಏನ?

ಯಾರವ ಸುಬ್ರ್ಯಾಯ, ಯಾರೆಂದು ತಿಳಿದು.
ಬಣ್ಣಂತೆ ಬಿಳಿದು, ಅಪ್ಪಂತೆ ಪರಮಯ್ಯ
ತಿಳಿದರೆ ಹೇಳಯ್ಯ!

ಪರ.— ನಾನಲ್ಲವೆ ಪರಮಯ್ಯ! ನನಗೆಲ್ಲಿ ಸುಬ್ರ್ಯಾಯ;
ಗುಂಡ್ರ್ಯಾಯ್ನ ಮಗರಾಯ ಇರಬೇಕು ಮಾರಾಯ.
ನೀ ಬಲ್ಲರೆ ಹೇಳು. ಅಲ್ಲಿಗೆ ಬಂದಾನು ನಿಜವೇ?
ಅವಳು ಹಾರಿದ್ದು ನಿಜವೆ? ನೀ ಬಲ್ಲರೆ ಹೇಳು,
ಬಲ್ಲವನೆ ಆಳು.

ಪಾಪ.— ಗುಂಡ್ರ್ಯಾಯರ ಮಗನೇನು! ಕಾಂಬೂಕೆ ಗುಂಡಾನ!
ಕಣ್ಣಿಗೆ ಉಂಡನ್ನ ಒತ್ತಿರಬೇಕು ಮತ್ತೇನು!
ನಾ ಬಲ್ಲವನೆ ಎಲ್ಲ. ಕೈ ಎತ್ತಿದಾ ಬಿರ್ನ!
ಎದುರಾದ್ದು ಇವಳ್ಕರ್ಮ ನಾ ಬಲ್ಲವನೆ ಎಲ್ಲ
ಸಂಸಯ ಇಲ್ಲ.

ಪರ.— ಕೆರೆಹಾರಿದಲ್ಲೇನು? ಸಿಟ್ಟಿಗೆ ಬಲಿಯೇನು?
ಕೊಂದವನೆ ಹಾಕ್ಯಾನ? ಮಾಡೋದಿನ್ನೇನು.
ನೀ ಬಲ್ಲರೆ ಹೇಳು. ಹೆದ್ರೋಳು ಅವಳಲ್ಲ
ನಾಚೀಕೆ ಮೊದ್ಲಿಲ್ಲ. ನೀ ಬಲ್ಲರೆ ಹೇಳು.
ಬಲ್ಲವನೆ ಆಳು.

ಪಾಪ.— ಹಾಗಾದರೆ ನಾನಂಬೆ; ಕತೆಗುಟ್ಟು ಬ್ಯಾರೆಂಬೆ.
ಥಳಕಿನ ಗಜನಿಂಬೆ, ಉರುಳೀತು ಬಾಳೆ ಹಂಬೆ.
ನಾ ಬಲ್ಲವನೆ ಎಲ್ಲ. ಕತೆ ಗುಟ್ಟು ಇನ್ನುಂಟು
ಬಿಡಿಸೋಕೆ ಕಷ್ಟುಂಟು. ನಾ ಬಲ್ಲವನೆ ಎಲ್ಲ
ಸಂಸಯ ಇಲ್ಲ.

ಪರ.— ಅವಳು ಮಾಯಿಲಣ್ಣನ ಮಗಳಂದ್ರೆ ಹೇಳಬೇಕೇ?
ಅವನು ಗುಂಡನ್ನ ಮಗನೆಂದ್ರೆ ಕೇಳಬೇಕೆ?
॥ ಪ ॥

ಪಾಪ.— ಕೆಸರಲ್ಲಿ ಕೈ ತೊಳೆವ ಜಾತಿಯುವಳು,
ಕತ್ತಲಲ್ಲಿ ಮುತ್ತು ಸುರಿವ ಜಾಣೆಯುವಳು
ಪರ.— ॥ ಪ ॥
ಪಾಪ. — ಉಂಡ್ಮನೆ ಗಳದಲೆಕ್ಕ ಇವಂಗೆ ಬೇಕು.
ಹೊಲ್ಸನಲ್ಲಿ ಮೀಯದಿದ್ರೆ ಜೀವ ಹೋಕು.
ಪರ.—॥ ಪ ॥
ಪಾಪ.— ಪ್ಯಾಟೆ, ಹಳ್ಳಿ—ಎಲ್ಲ ಒಂದೆ ಬಿರ್ಮಂಗೆ
ಹೆಣ್ಣು ಎಂಬ ಜಾತಿ ಆದ್ರೆ ಆಯ್ತುವಂಗೆ.
ಪರ.—॥ ಪ ॥
ಪಾಪ. — ಕಿವಿಗ್ಬಿತ್ತು ಬಿರ್ಮನ ಸಂಸಾರ ಊರ್ಮೇಲಂತ
ರಟ್ಟೆ ಹಿಡಿದು ಕೇಳಿದಳಂತೆ: "ಹೌದೇ"ನಂತ.
ಪರ. — ॥ ಪ ॥
ಪಾಪ. — ಹೆಣ್ಣು ನೀನು; ಇಷ್ಟು ಸ್ಗೊಕ್ಕೆ! ಗಂಡನ್ ಕೇಳ್ಳೋಕೆ?
ಬೇಕಾದ್ಹಾಂಗೆ ಇರೋಂವ ನಾನು. ಎಲೆ ಕಾಳ್ಬೆಕ್ಕೆ?
ಪರ.—॥ ಪ ॥
ಪಾಪ.—"ನಿನ್ ಗಂಜಿ ತಿಂದ್ಕೊಂಡು ತಣ್ಣಗ್ ಬಿದ್ದಿರು.
ನನ್ ತಳ್ಳಿಗೆ ಬರೋದಾದ್ರೆ ಕುಡ್ಯೇಕೆ ಕಣ್ಣೀರು."
ಪರ.— ॥ ಪ ॥
ಪಾಪ.— ಅಂದೀಗಷ್ಟೆ ಮಾತು ನಡೀತು, ಸೂರು ತೆಪ್ಪಗೆ
ಗೆದ್ದು ಎದ್ದು ಬಿರ್ಮ ಹೋದ; ಡೌಲು ಬಿಮ್ಮಗೆ!
ಪರ.—॥ ಪ ॥
ಪಾಪ. — ಒಂದು ಮಳೆಗಾಲ್ ಕಳೆಲಿಲ್ಲ. ಸೂರು ಚಿಗ್ರಿದ್ಲು,
ಕಣ್ಣಿನ ಕೊಪ್ಪಿಗೆ ಸಿಕ್ಕಿಬಿಟ್ಟ ಸುಬ್ಬು ಸೆಳೆದ್ಲು.
ಪರ.—॥ ಪ ॥
ಪಾಪ. — ಊರಿನ ಕಣ್ಣೆ ಕೆಂಪಾಪ ಒಂದು ಸಂಜೀಗೆ,
ಬಿರ್ಮ ಬರ್ತಾನೆ ಮನೆಗಂದು, ಕೂಳಿನಾಸೆಗೆ.

ಪರ. — ॥ ಪ ॥

ಪಾಪ — ಸೂರು ಜತೆಯಲ್ಲಿದ್ದ ಸುಬ್ಬು, ಜರ್ಬುಕೆದ್ರಿತು,
'ಒಳ್ಳೇ ಮಾತೀಲಿ ನಡೀದಿದ್ರೆ ಪ್ರಾಣಕ್ ಬಂದೀತು'

ಪರ. — ॥ ಪ ॥

ಪಾಪ. — ನಂಜಿನ ನಗೀ ಸೂಸಿಬಿಟ್ಟು ಸೂರು ಅಂದ್ಲು
"ಅವರವರ ದಾರಿ ಅವರಿಗಂದದ್ ಉಂಟ ಹಂಬ್ಲು?"

ಪರ — ॥ ಪ ॥

ಪಾಪ — ಸಿತ್ತ ಅಡರಿ ಹಸ್ತ ಎತ್ತಿದ; ಸುಬ್ಬುಗಾಗ್ತಿತ್ತು
ಸರಕ್ ಬಂದ್ಲು ಸೂರು ತಡ್ಯೋಕೆ; ಕೆನ್ನೆಗೆರಗಿತು.

ಪರ. — ॥ ಪ ॥

ಪಾಪ. — ಒತ್ತಿಬಿದ್ದ ಹೆಣದ ಭಾರಕ್ ಬಿರ್ಮ ಕೆಳಕ್ಕೆ
ಸುಬ್ಬು ಬಾಲ ಮುಡ್ಚಿಬಿಟ್ಟ ಗುಡ್ಡದಾಚೀಗೆ

ಪರ. — ॥ ಪ ॥

ಪಾಪ. — ಸೊಯು ಬಂದು ಕಾಂಬುವಾಗ ಯಾರೂ ಇದ್ದಿಲ್ಲ.
ಸೂರು ಮೈನ ಅಲುಗ್ಸಿ ಕಂಡ್ರೆ ಉಸಿರು ಸುದ್ದಿಲ್ಲ.

ಪಾಪ.
ಪರ } — ನೀರಿಗೆ ಬೈಲಿನ ಸೂರಕ್ಕ ಮೊನ್ನೆ
ಜಾರೀ ಆದಳಂತೆ । ನೀರಿಗೆ
ಜಾರೀ ಬಿದ್ದಳಂತೆ
ನೀರೇನು ಅಷ್ಟೊಂದು ಇದ್ದಿಲ್ಲವಂತೆ
ಕೊಲೆ ಸುಳಿವು ತಪ್ಸೋಕೆ ಬಿರ್ಮಣ್ಣನಂತೆ
ಹೆಣವನ್ನೆ ನೀರಿಗೆ ಇಳ್ಸಿದ್ದನಂತೆ
ಸಾಲದಕ್ ಕಲ್ಲೊಂದ ಕಟ್ಟಿದ್ದಂತೆ

೪

(ತೆರೆಯಲ್ಲಿ ಊರಲ್ಲಿ ಗುಜುಗುಜು ಸುದ್ದಿ ಪ್ರಸಾರವಾಗುವುದು)

ಯಾರೋ ಅಂದರು!

ಏನಂತೆ?

ಯಾರೋ ಅಂದರು! ಯಾರೋ ಅಂದರು!
ಏನಂತೆ? ಏನಂತೆ?
ಯಾರೋ ಅಂದರು! ಯಾರೋ ಅಂದರು! ಯಾರೋ ಅಂದರು!
ಏನಂತೆ? ಏನಂತೆ? ಏನಂತೆ?

(ಈಸೂರ ಸಾಂಬಣ್ಣರಿಬ್ಬರು ಆನಂದ ಪ್ರಸ್ತಾವದಲ್ಲಿ ಮಗ್ನರಾಗಿ ಬರುವರು.)

ಈಸೂರ— ಯಾರೋ ಅಂದರು!

ಸಾಂಬಣ್ಣ — ಏನಂತೆ?

ಈಸೂರ— ನೀರಿಗೆ ಬೈಲಿನ ಸೂರಕ್ಕ ಮೊನ್ನೆ
ಜಾರೇ ಆದ್ದಕ್ಕಂತೆ। ನೀರಿಗೆ
ಕೊಂದೇ ಎಸೆದರಂತೆ
ನೀರೇನು ಅಷ್ಟೊಂದು ಇದ್ದಿಲ್ಲವಂತೆ
ಕೊಂದವ ಬಿರ್ಮಣ್ಣ ತಪ್ಪೋಕಂತೆ
ಹೆಣವನ್ನೆ ನೀರಿಗೆ ಹಾಕಿದ್ದಂತೆ
ಸಾಲದಕ್ಕೆ ಕಲ್ಲೊಂದ ಕಟ್ಟಿದ್ದಂತೆ

ಸಾಂಬ.— ಆಹಹ ಏನೂ ಮಾಡ್ತ್ಯಾರು। ಆಹಹ ಏನೂ ಮಾಡ್ತ್ಯಾರು
ಆಹಹ ಏನೂ ಮಾಡ್ತ್ಯಾರು। ಆ ಈ ಊರ ಜನಗಳು ॥ ಪ ॥
ಕಡ್ದು ಕೊಂದಾರು
ಹೆಣನ ಮುಂದೆ ಹಾಲೂ ಕುಡ್ದಾರು
ವರ್ಷಕೆ ಹತ್ತೆಂಟು
ಕಮ್ಯಂದ್ರು ಅಷ್ಟಾರು ಹೆಣವುಂಟು.
ಏನಾರು ತುಬ್ಬಂಟ?
ಕೊಲ್ಲುಕೆ ಈಸಾರು ಬಿಸಾತುಂಟ!

ಈಸೂರ— ॥ ಪ ॥
ಹೌದೇ ಹೌದಣ್ಣ
ಕೊಲ್ಲುಕೆ ಹೆದ್ರಿಕೆ ಯಾಕಣ್ಣ?
ನಮ್ಮೂರ ಪೋಲಿಸು

ಧರ್ಮರಾಯ್ನ ಮರ್ಜಿನ ಆಫೀಸು.
ಹಿಡಿದರೆ ಕೊಂದವ್ನ
ತಿಳಿದಿದೆ ಸತ್ತನು ಬಾರೆಂಬುದ್ನ

ಸಾಂಬ.— ॥ ಪ ॥
ಅದ್ವೈತದ ಮರ್ಜಣ್ಣ
ಈ ಊರ ಪೋಲಿಸ ಜನಕಣ್ಣ.
ಗೀತೆಯು ಪರಮಾತ್ಮ
ಮತ್ತೊಬ್ಬ ಗಾಂಧಿ ಮಹಾತ್ಮ
ಇವ್ರಿಗೆ ಮೇಲ್ಪಂಕ್ತಿ
ಆದ್ರಿಂದ ಬಂದಿದೆ ದುರ್ಗತಿ ॥
ಕೊಂದವ ಸತ್ತವ
ಇವರಿಗೆ ಒಂದೇ ಲೆಕ್ಕವ!
ಸಾವೆಂಬುದು ಮಾಯವು
ಆದ್ರಿಂದ ಕಿಸಿಗಿಷ್ಟು ಸಾಯವು
ಊರಲ್ಲಿ ಅನ್ಯಾಯ
ಹೆಚ್ಚಾರೆ ಬದುಕುದು ಹ್ಯಾಂಗಯ್ಯ.

ಸಾಂಬ.— ಅಹಹ ಅವ್ರು ಹಾಳಾಗ್ಲಿ । ಅಹಹ ಅವ್ರು ಹಾಳಾಗ್ಲಿ
ಅಹಹ ಅವ್ರು ಹಾಳಾಗ್ಲಿ । ಆದ್ರೆ ನಡೆದದ್ದೇನಿಲ್ಲ?

ಈಸೂರ— ನಿಜವಂತೆ
ನಿಜವಂತೆ ಸಾಂಬಣ್ಣ, ಸತ್ತದ್ದು ನಿಜವು
ಸತ್ಮೇಲೆ ಮಾತೇನು— ಊರೆಲ್ಲ ಸುದ್ದಿಯು

ಸಾಂಬ.— ಯಾಕೆ ಸೂರು ಸತ್ತಳಂತೆ; ಕೆರೆಹಾರಿ ಕೊಂಡಳೋ?

ಈಸೊರ— ಕೆರೆಹಾರಿ ಕೊಂಡುದಲ್ಲ, ಕೊಂದು ನೂಕಿಬಿಟ್ಟರು.

ಸಾಂಬ.— ಕೊಂದು ಹಾಕಿ ಲಾಭವೇನು? ಯಾರಂತೆ ಕೊಂದರು?

ಈಸೊರ— ಬೇರಾರ್ನೊ ಕರ್ದಳೆಂದು ಬಿರ್ಮಂತೆ ಕೊಂದನು.

ಸಾಂಬ.— ಗಾಯವೇನು ಇಲ್ಲವಂತೆ. ಅದು ಹ್ಯಾಂಗೆ ಕೊಂದನೊ?

ಈಸೊರ— ನೀರಿಲ್ದ ಕೆರೆಗಂತೆ ಕಲ್ಕಟ್ಟಿ ಬಿಟ್ಟನೋ

ಸಾಂಬ.— ಹಾಂಗಿದ್ರೆ ತಾನ್ಯಾಕೆ ನೇಣಿಟ್ಟು ಸತ್ತನೋ?

ಈಸೊರ— ಅದು ಮಾತ್ರ ಕೇಳ್ಲಿಲ್ಲ; ನೇಣಿಟ್ಟು ಸತ್ತನೆ!

ಸಾಂಬ — ನಿಜವಂತೆ.

ನಿಜವಂತೆ ಈಸೊರ ಸತ್ತದ್ದು ನಿಜವು

ನಾನೆಂಬೆ ಕೊಂದದ್ದು ಮೂರನೆ ಜನವು

ಈಸೊರ— ಹಾಂಗೇನು!

ಹಾಂಗೇನು ಸಾಂಬಣ್ಣ, ಎರ್ಡರ್ ಹೆಣ ಸಾಯ್ಲು

ಮೂರನೆವ್ರು ಬರ್ತಾರ, ಅದು ನಡು ಹಗಲು.

ಸಾಂಬ.— ಈಸೊರ.

ನೀ ಕೇಳು ಈಸೊರ ಇದು ಕಿವಿರ್ನಾಲು

ಮುಳ್ಳಿಂದ ಮುಳ್ಳನ್ನು ಕೀಳೋದೆ ಚಾಲು.

ಈಸೊರ— ಸಾಂಬಣ್ಣ,

ನೀ ಹೇಳು ಸಾಂಬಣ್ಣ ಅದರ ತಪಶೀಲು

ಬಾಡೀಗಿ ಜನತಂದು ಹೊಡಿತಾರ ಕೀಲು

ಸಾಂಬ.— ಓಹೋ ಸ್ವಾರಸ್ಯ ಉಂಟೇ ಕಥೆ

ಓಹೋ ಸ್ವಾರಸ್ಯ ಉಂಟೇ ಕಥೆ

ಈಸೊರ— ಸ್ವಾರಸ್ಯ ಇಲ್ಲದೆ ಕೊಲ್ತಿದ್ರು ಯಾಕೆ!

ಸ್ವಾರಸ್ಯ ಇಲ್ಲದೆ ಕೊಲ್ತಿದ್ರು ಯಾಕೆ?

ಸಾಂಬ.— ನನ್ಕಿಲಿ ತುರಿಸುತ್ತೆ ಕತೆ ಕೇಳೋಕೆ

ನನ್ಕಿವಿ ತುರಿಸುತ್ತೆ ಕತೆ ಕೇಳೋಕೆ.

ಈಸೊರ— ನನ್ನ ಬಾಯಿ ಹಾಂಗೇನೆ ಅದನ್ ಹೇಳೋಕೆ

ನನ್ನ ಬಾಯಿ ಹಾಂಗೇನೆ ಅದನ್ ಹೇಳೋಕೆ.

ನಿಮಗೆ ತಿಳಿದೆ ಸುಬ್ರಾಯು

ಅವನದ್ದೆ ಕಾರ್ಯ

ಸಾಂಬ.— ಗುಂಡಣ್ಣನ ಮಗ ಸುಬ್ಬ.

ಅವನಿಗೇನಬ್ಬ!
ಈಸೊರ — ಹೆಣ್ಣಿಗಾಗಾಯ್ತಂದೆ
ಅವನದಕೆ ಮುಂದೆ
ಸಾಂಬ. — ಹೌದಂತೆ ಹೆಣ್ಣೆಂದ್ರೆ
ಜೀವಕ್ಕೆ ತೊಂದ್ರೆ
ಈಸೊರ -- ಅಷ್ಟಕ್ಕೆ ತೀರ್ಮಾನ
ಮಾಡ್ಬೇಡ ಸಾಂಬ
ಸಾಂಬ. — ನೀವ್ ಹೇಳಿ ಸಂಗ್ತೀನ
ಹೇಳಿದ್ರೆ ಒಯಿನ.
ಈಸೊರ — ಕತೆಗೆ ಮೂಲ ಆ ಸೂರು
ಕೀಳ್ಬೇಕೆ ಬೇರು?
ಸಾಂಬ. — ಗರತಿ ಸೂಳೆ ಎಂದ್ರುವಳೆ
ಕೆಸರಂಗಿನ ಜವಳೆ
ಈಸೊರ — ಸೂರು ಸೇಷರ ಮುಸಲತ್ತು
ಊರಿಗೇ ಗೊತ್ತು
ಸಾಂಬ. — ಹಾದಿಗೆ ಬಂದ್ರಿ ನೀವೀಗ
ಅದ್ಕಿಛೀಂಗಾಯ್ತು.
ಸಾಂಬ. — ಆವ ಮನೆಬಿಟ್ಟ ತಕ್ಷಣ
ಅಲ್ಲಿಯೇ ಸೇಸಣ್ಣ.
ಈಸೊರ — ಗಂಡಂಗೆ ಬಲುದಿನ
ಒಂದು ತಿಳಿದಣ್ಣ.
ಸಾಂಬ. — ಇಂಥೊಂದು ಜನವುಂಟೆ
ತಿಳಿದಿರಲು ತಂಟೆ!
ಈಸೊರ — ಗೊತ್ತಾಯ್ತು ಒಂದೀನ.
ಹೇಳೀದ ತಕ್ಷಣ
'ನೀವಿಲ್ಲಿ ಬಂದ್ರಣ್ಣ

ಕುಟ್ಟೂವೆ ಕೊಟ್ಟಣ'

ಸಾಂಬ. — ಗಂಡಂದ್ರೆ ಆ ಬಿರ್ಮ!
ಇರಬೇಕು ವರ್ಮ
ಸೇಸಣ್ಣನ ವೈಚರ್ಮ
ಸುಲಿದ್ರೇನೆ ಧರ್ಮ

ಈಸೊರ — ದುಡ್ಡಿಲ್ಲವೆ ಸೇಸಂಗೆ?
ಸೂರೂ ಹಂಗಂಗೆ
ಪೋಲಿಗಳ ಅಂತ್ರಗಂಗೆ
ಅವನ ಬಗಲಂಗೆ.

ಸಾಂಬ. — ಏನೇನು ಹೇಳಣ್ಣ
ಮುಂದಿನ ಬಣ್ಣ
ಆಪಂತೆ ಬೆನ್ನುಣ್ಣ
ಹೊಡಿಬೇಕಣ್ಣ

ಈಸೊರ — ಒಂದೀನ ಸುಬ್ರಾಯು
ಸ್ಯಾಸನ ಕಾರ್ಯ
ತಕ್ಕೊಂಡು ತಾತ್ಪರ್ಯ
ಕಂತಿದ್ದ ಸೂರ್ಯ
ಸೂರುಮನೆ ಮುಂದಂತೆ
ಕಾದೂ ನಿಂತ
ಹೆಸರು ಹಿಡಿದು ಕರದಂತೆ
'ಸೂರು' ಅಂತ.

ಸಾಂಬ. — ಬಂದಳೇನು ಅವಳಾಗ?
ವಿಷ ಕಾಳಿಂಗ.
ಬಿರ್ಮಿಲ್ಲ ಗುಡಿಯೊಳಗೆ
ಬರಲಿಲ್ಲ ಬೇಗ . . !

ಈಸೊರ — ಸಮಾಧಾನ ಮಾಡ್ಸಾಂಬ

ಬಿರ್ಮಲ್ಲ ಹುಂಬ
ಕರದ್ದು ಕೇಳೀ ಹಿಡಿಂಬ
ಬರಿದಳು — ಜಂಭ.
'ಇಂದೀನ ಬಿರ್ಮಿಲ್ಲ'
ಎಂಬೀ ಸೊಲ್ಲ
ಸುಬ್ಬ್ಯಾಗೆ ತಟ್ಟಿಗಲ್ಲ
ಅಂದಳು ಮೆಲ್ಲ.
ಸಾಂಬ. — ಅಬ್ಬಬ್ಬ ಈ ಸೂರು
ಎಂಥಾ ಜೋರು.
ಹಿಡ್ಕೊಂಡು ತೊಗಲ್ಯಾರು
ಕೊಡ್ಬೇಕು ನೂರು.
ಈಸೊರ — ಕೇಳಿಲ್ಲಿ ಚಮತ್ಕಾರ
ಆಯ್ತು ವತಾರ
ಬಿರ್ಮ ಬಂದ ಸರಸರ
ಏನದು ಅಬ್ಬರ
ತೆಗ್ದೇಟಗ್ ಫೈಸಲು
ಸೂರು ಅಲ್ಲು
ಸುಬ್ರಾಯ ಕಡಿತ್ತಲ್ಲು
ಬಿಟ್ಟರೆ ಚಲ್ಲು
ಜೀವಕ್ಕೆ ಸಂಚುಕಾರ
ಅಲ್ಲೇ ನಿಂತರ.
ಇಬ್ಬರೂ ಉರಡ್ಯಾರ
ಅಬ್ಬಬ್ಬ ಅಬ್ಬರ
ಸಾಂಬ. — ಸುಬ್ರಾಯ್ನ ಅವತಾರ
ಅಲ್ಲೇ ಮುಗಿದರ
ಊರಿಗೇ ಉಪಕಾರ

ಆಗ್ತಿತ್ತು ಅಲ್ಲರ
ಈಸೊರ—ಹಣೆಯಗಿನ ಬರವಾರ
ಓದೂದ್ಯಾರ
ಬಿರ್ಮನ ಗಿರಾಚಾರ
ತಪ್ಸೂದ್ಯಾರ
ಸಾಂಬ.—ಆವನೇನು ಸತ್ತವನು
ನ್ಯಾಯವೇನ?
ಕಲಿಕಾಲ್ದಲ್ಲಿ ಹೀಂಗೇನ
ದೇವರೇ ಮೌನ
ಈಸೊರ—ಸೇಸು ಸುಬ್ಬ ತಿಗ್ತಾರ
ಏನ್ ಹಂಕಾರ
ಸತ್ತವರಿಬ್ಬರು ಸತ್ತರ ಏನ್ ಹಾಂಗಾರ!
ಸಾಂಬ.—ನೀರಿಗೆಬೈಲಿನ ಸೂರಕ್ಕ ಮೊನ್ನೆ
ಜಾರೀ ಆದ್ದಕ್ಕಂತೆ। ಗಂಡ
ಹಾರೀ ಕೊಂದನಂತೆ
ಹೆಂಡ್ತೀನ ಕೊಂದವ ಬಿರ್ಮಣ್ಣನಂತೆ
ಬಿರ್ಮನ ತಿಂದವ ಸುಬ್ರಾಯನಂತೆ
ನೀರಿಗೆ ಹೆಣಹಾಕಿ ತಾ ಮಾಯನಂತೆ
ಇದಕ್ಕೆಲ್ಲ ಸಾಸ್ತ್ರವು ಸೇಸಪ್ಪಂದಂತೆ.
(ದೂರದ ಗೋಳಿ ಮರದ ಕೆಳಗೆ ಇಬ್ಬರು ಮನುಷ್ಯರ ಛಾಯೆಯನ್ನು ಕಂಡು)
ಈಸೊರ—ಸುಮ್ನಿರು ಸಾಂಬಣ್ಣ, ಸುಮ್ನಿರು
ಅದ್ಯಾರೋ ಬರ್ತಾರೆ ಸುಮ್ನಿರು
ಸಾಂಬ.—ನಿಂಗ್ ಮರ್ಳು ಈಸೊರ ಈಗ್ಯಾರು
ಮುಸ್ಸಂಜೆಯಾಗೆ ಬರ್ತಾರೆ ಮರ್ಳರು
ಈಸೊರ—ಅಲ್ಕಾಂಬುದಿಲ್ಲೇನು ಗೋಳಿಮರ?
ಪ್ರೇತಕ್ಕೆ ಅಲ್ಲಂತೆ ಸಂಚಾರ

ಸಾಂಬ. — ಏನಾರೂ ಹೇಳ್ಬೇಡ ಸುಮ್ನಾರ
ಎದೆಯೊಳಗೆ ಚಳಿಯುಣ್ಣ ಥರಥರ
ಈಸೂರ — ದೇವ್ರಾಣೆ ಅಲ್ಕಾಣ — ಬಿರ್ಮ ಸೂರು
ಪ್ರೇತಾಗಿ ನೆರ್ಳಂತೆ ಬರ್‍ತಾರ
ಸಾಂಬ. — ದಮ್ಮಯ್ಯ ದಮ್ಮಯ್ಯ ಹೌದsರ
ಯಾಕಾರು ಬೇಕಿತ್ತು ಸುದ್ದಿಯಾರ
ಈಸೂರ — ಕಂಬಿ ಕೀಳು ದಮ್ಮಯ್ಯ ರಾಮರಾಮ
ಬೆನ್ಹತ್ತಿ ಬರ್‍ತಾರೊ ಏನ್ ಕರ್ಮ

(ಪಲಾಯನ ಮಾಡುವರು.)

೫

(ತೆರೆಯಲ್ಲಿ ಮೊದಲಿಗಿಂತ ಗಟ್ಟಿಯಾಗಿ ಊರವರ ಗುಜು ಗುಜು ಎದ್ದಿದೆ)

ಯಾರೋ ಅಂದರು!
ಏನಂತೆ?
ಯಾರೋ ಅಂದರು! ಯಾರೋ ಅಂದರು!
ಏನಂತೆ? ಏನಂತೆ?
ಯಾರೋ ಅಂದರು! ಯಾರೋ ಅಂದರು! ಯಾರೋ ಅಂದರು!
ಏನಂತೆ? ಏನಂತೆ? ಏನಂತೆ?

(ಚಿಕ್ಕಪ್ಪ ಕುಕ್ಕಪ್ಪ ಎಂಬಿಬ್ಬರು ಮಾತಾಡುತ್ತ ಬರುವರು)

ಚಿಕ್ಕಪ್ಪ — ಯಾರೋ ಅಂದರು!
ಕುಕ್ಕಪ್ಪ — ಏನಂತೆ?
ಚಿಕ್ಕ. — ನೀರಿಗೆ ಬೈಲಿನ ಸೂರಕ್ಕ ಮೊನ್ನೆ
ಜಾರೇ ಆದ್ದಕ್ಕಂತೆ, ಗಂಡ
ಹಾರೀಲಿ ಕೊಂದನಂತೆ
ಹೆಂಡ್ತೀನ ಕೊಂದವ ಬಿರ್ಮಣ್ಣನಂತೆ
ಬಿರ್ಮನ ತಿಂದವ ಸುಬ್ರಾಯನಂತೆ

ನೀರಿಂಗೆ ಹೆಣಹಾಕಿ ತಾ ಮಾಯವಂತೆ
ಇಷ್ಟೆಲ್ಲ ಸೂಸ್ತ್ರವು ಸೇಸಪ್ಪಂದಂತೆ
ಸತ್ತವ್ರು ಪ್ರೇತಾಗಿ ಕಾಣ್ಸ್‌ಕೊಂಡರಂತೆ
ಸಾಂಬಣ್ಣ ಈಸೂರ ಬಾಲವುಡ್ಗಿದ್ರಂತೆ

ಕುಕ್ಕ.— ಯಾವುದು ಸತ್ಯವೋ, ಯಾವುದು ಮಿತ್ಯವೋ?

ಚಿಕ್ಕ.— 'ಹಾರೇದು ಮಿತ್ಯವು; ಕೊಂದದ್ ಸತ್ಯವು
ಸುಬ್ರಾಯು ಬಂದು ಇಬ್ರ ಕೊಂದದ್ ಅದುವೆ ನಿಜವು

ಕುಕ್ಕ — ಯಾವುದು ಸತ್ಯವೋ, ಯಾವುದು ಮಿತ್ಯವೋ?

ಚಿಕ್ಕ — ಕೆರೇದು ಮಿತ್ಯವು ಕೊಂದದ್ದು ಸತ್ಯವು
ಹೆಣ ಅಡಗ್ಸಿ ಮಾಯವಾದದ್ ಅದುವೆ ನಿಜವು

ಕುಕ್ಕ.— ಯಾವುದು ಸತ್ಯವೋ, ಯಾವುದು ಮಿತ್ಯವೋ?

ಚಿಕ್ಕ.— ಜಾರೆ ಮಿತ್ಯವು, ಉಳಿದ್ದು ಸತ್ಯವು
ಸೇಸುಗಾಗಿ ಸುಬ್ಬು ಬಂದು ಕರದ್ ಸತ್ಯವು

ಕುಕ್ಕ.— ಯಾವುದು ಸತ್ಯವು, ಯಾವುದು ಮಿತ್ಯವು?

ಚಿಕ್ಕ.— ಎಲ್ಲ ಮಿತ್ಯವು, ಇಷ್ಟು ಸತ್ಯವು
ಸಾಂಬು ಈಸೂರ ಪ್ರೇತಕಂಡು ಓಡಿದ್ದು ನಿಜವು

(ದೂರದಿಂದ ಆ ಮಾರ್ಗವಾಗಿ ಅತ್ತೆಯ ಮನೆಯಿಂದ ಹಿಂತಿರುಗುವ ಬಿರ್ಮನೂ ಅವನ ಹೆಂಡತಿ ಸೂರೂ ಬರುವರು)

ಕುಕ್ಕ.— ಯಾವುದು ಸತ್ಯವೋ, ಯಾವುದು ಮಿತ್ಯವೋ?

ಚಿಕ್ಕ.— ಕೊಲೆಯು ಮಿತ್ಯವು, ಸಾಯ್ದಿದ್ದು ಸತ್ಯವು?
ಬಿರ್ಮು ಸೂರು ಬರೋದು ನೋಡು, ಹಗಲು ಸತ್ಯವು.

ಸೂರು — ತವರಂಗೆ ನಾಕ್ದಿನ ಇರ್‍ಬೋದಿತ್ತು
ನಿಮಗೇ ಅವಸರ
ಹುಣ್ಣಿಮೆ ಪಾಡ್ಯಕ್ಕೆ ಬರ್‍ಬೋದಿತ್ತು.
ಊರೊಳಗೆ ಬ್ಯಾಸರ

ಬಿರ್ಮ — ಮಾವನ ಮನ್ಯಂಗೆ ಎಸ್ದಿನ ಇಪ್ಪುದು

ಮೂಲ್ಗೀಣಿ ಆಸ್ತೀಯು?
ಹೆಂಡ್ತೀಯು ತವರಂದು ಚಾವಡಿಗೆ ಅಂಟದ್ರೆ
ಮಾನಕ್ಕೆ ಜಾಸ್ತಿಯು?
ಸೂರು — ನಮ್ಮವ್ರು ಅಂದ್ಮೇಲೆ ಆದೇನು ಭೇದವೋ
ಊರವರು ಅಂತಾರ?
ಊರವರ ಬಾಯಿಗೆ ಬೀಗ್ಯಾರು ಹಾಕೋರು
ಹೇಳೋರು ಹೇಳ್ತಾರ.
ಬಿರ್ಮ — ಗದ್ದೇಲಿ ಪೈರೆಲ್ಲ ಹಣ್ಣಾಗಿ ಹೊನ್ನಾಗಿ
ಹಕ್ಕ್ಯೆಲ್ಲ ತಿಂತಾವ
ಮುಂಗಾರು ಮಳೆಯಂತು ಗಡಗುಟ್ಟಿ ಬಂದರೆ
ಅಲ್ಲೀನೆ ಬತ್ತಾವು.
ಸೂರು — ಆದು ಒಂದು ಹೌದೆಂಬೆ; ಈಸ್ದೀನ ಬಿಟ್ಟದ್ದೆ
ದೇವ್ರುದ್ದು ದೊಡ್ಡಂತೆ
ಅಬ್ಬೀಯು ಒತ್ತಾಯು, ತಪ್ಸುತ್ತೆ ಬಂದೇನು
ನಾಳೀಗೆ ಕೊಯ್ಲಂತೆ
ಬಿರ್ಮ — ಕತ್ತೀಗೆ ಹಲ್‌ಹಾಕ್ಸಿ ಸಂಜೀನೆ ತತ್ತೀನೆ
ಊರೊಳಗಿನ ಎಲ್ಲಾರ
ಕೊಯ್ಲಾಯ್ತು ತಿರಿಕಟ್ಟಿ ಉಳಿದದ್ದು ನಮ್ಮದು
ಕಂಡವರು ನಗ್ತಾರೆ
ಸೂರು — ಅವರು ನಕ್ರಂದ್ ಹೇಳ್ತೀರ, ನಕ್ಕರೆ ನಕ್ಕೊಳ್ಳಿ
ಸೂರ್ಯಂಗೆ ಉಗಿತಾರ
ಉಗಿದುಗಿದು ಕಡೆಗಂಟ ತಮ್ಮೋರಿ ಎಂಜ್ಲಂತೆ
ಊರವರ ಹಣೆಬಾರ

(ಹಾಗೇನೆ ತೆರಳುವರು)

ಕುಕ್ಕ. — ಎಲಿಲ್ದ ಕತೆಯೊಂದು ಹುಟ್ಟಿತು ಎಲೆ ಕುಕ್ಕ
ಇಂಥೊಂದು ಚಮತ್ಕಾರ ಉಂಟೇನ?

ಚಿಕ್ಕ — ಇಷ್ಟೆಲ್ಲ ಜನರು ಹೇಳಿದ್ದು ಸುಳ್ಳೇ?
ಕುಕ್ಕ — ಇಂಥೊಂದು ಚಮತ್ಕಾರ ಉಂಟೇನ!
ಚಿಕ್ಕ.— ಅವ್ರಂತು ಇಬ್ರು ಸತ್ತ್ರದ್ದು ಸುಳ್ಳೆ?
ಕುಕ್ಕ — ಇಂಥೊಂದು ಚಮತ್ಕಾರ ಉಂಟೇನ!
ಚಿಕ್ಕ. — ಸುಬ್ರಾಯ ಅವರ ಕೊಂದದ್ದು ಸುಳ್ಳೆ?
ಕುಕ್ಕ. — ಇಂಥೊಂದು ಚಮತ್ಕಾರ ಉಂಟೇನ!
ಚಿಕ್ಕ. — ಸೇಸಕ್ಕ ಇಷ್ಟು ಮಾಡ್ಸಿದ್ದು ಸುಳ್ಳೆ?
ಕುಕ್ಕ. — ಇಂಥೊಂದು ಚಮತ್ಕಾರ ಉಂಟೇನ!
ಚಿಕ್ಕ. — ಏನಾರು ಸುಳ್ಳಲ್ಲ, ಇದಂತು ಸುಳ್ಳಲ್ಲ
ಕುಕ್ಕ — ಗಾಳಿ ಯಿಲ್ದೆ ಬರಿ ಎಲೆ ಅಲುಗೀತಾ?
ಚಿಕ್ಕ. — ಅವರಿಬ್ರ ನಡೆ ಸಮ ಇಲ್ಲೆಂಬುದು ನಿಜವು
ಕುಕ್ಕ — ಗಾಳಿಯಿಲ್ದೆ ಬರಿ ಎಲೆ ಅಲುಗೀತಾ?
ಚಿಕ್ಕ. — ಸೂರಕ್ಕನ ನಂಬ್ಲಾರೆ, ಬಿರ್ಮಣ್ಣ ಅಂಥೋನೆ
ಕುಕ್ಕ. — ಗಾಳಿಯಿಲ್ದೆ ಬರಿ ಎಲೆ ಅಲುಗೀತಾ?
ಚಿಕ್ಕ. — ಗಂಡ ಹೆಂಡ್ತಿಗೆ ಅಷ್ಟಷ್ಟೆ—ಅದಂತು ಸತ್ಯವು
ಕುಕ್ಕ. — ಗಾಳಿಯಿಲ್ದೆ ಬರಿ ಎಲೆ ಅಲುಗೀತಾ?
ಚಿಕ್ಕ — ಆದದ್ದು ಅಲ್ಲಾರು, ಆಪುದು ನಿಜವಂತೆ
ಕುಕ್ಕ. — ಗಾಳಿಯಿಲ್ದೆ ಬರಿ ಎಲೆ ಅಲುಗೀತಾ?
ಚಿಕ್ಕ. — ಗಾಳಿಯಿಲ್ದೆ ಬರಿ ಎಲೆ ಅಲುಗೀತಾ?
ನೀರಲ್ಲಿ ಗುಂಡ್ಕಲ್ಲು ತೇಲೀತಾ?
ಎಣ್ಣೆಗು ಶೀಗೇಗೂ ಕೂಡಿತಾ?



PRINTED AT THE DHARMA PRAKASH PRESS, MANGALORE.